ಡಿ. ವಿ. ಪರಮಶಿವಮೂರ್ತಿ

# ಬೇಲಿಮಠದ ಶಾಸನ

ಪ್ರಸ್ತುತ ಶಾಸನವು ಬೆಂಗಳೂರು ನಗರದ ಬಿನ್ನಿಮಿಲ್ಲಿನ ಬಲಪಕ್ಕಕ್ಕಿರುವ ಬೇಲಿಮಠದಲ್ಲಿದೆ. ಮಠದ ಆವರಣದಲ್ಲಿರುವ ದೇವಾಲಯದ ಬಲಪಕ್ಕಕ್ಕಿರುವ ಬಸವನ ಮಂಟಪದ ಹಿಂಭಾಗದ ಗೋಡೆಯ ತಳಭಾಗದಲ್ಲಿ ಈ ಶಾಸನವಿದೆ. ಇದು ಎಲ್ಲೂ ಪ್ರಕಟವಾಗಿರುವುದಿಲ್ಲ. ಶಾಸನದ ಕಾಲ ಕ್ರಿ. ಶ. ೧೭೬೧. ಶಾಸನದ ಉದ್ದ ೮೫ ಸೆಂ. ಮೀ., ಅಗಲ ೨೦ ಸೆಂ. ಮೀ. ಇದೆ. ಶಾಸನದ ಪಾಠ ಐದುಸಾಲುಗಳಿದ್ದು, ಲಿಪಿಯು ಸ್ಪುಟವಾಗಿದೆ. ಈ ಶಾಸನದ ಹಿಂಭಾಗದಲ್ಲಿ ಮಂಟಪದ ಒಳಗೆ ಉತ್ತರಕ್ಕೆ ಅಭಿಮುಖವಾಗಿರುವ ಶಿಲೆಯ ಪಾದಗಳನ್ನು ಕೆತ್ತಲಾಗಿದೆ.

ಈ ಶಾಸನದಲ್ಲಿ ಹೊಸಕೋಟೆಯ ಮಹಂತೇಶ್ವರ ಪ್ರಭು ಮತ್ತು ಅವರ ಆಪ್ತಶಿಷ್ಯರಾದ ಮರಿಸಿದ್ಧಲಿಂಗ ದೇಶಿಕರ ಉಲ್ಲೇಖವಿದೆ. ಮಹಂತೇಶ್ವರಪ್ರಭುವು ಶಿವೈಕ್ಯರಾದಾಗ ಶಿಷ್ಯರಾದ ಮರಿಸಿದ್ಧಲಿಂಗ ದೇಶಿಕರು ಸಮಾಧಿಯನ್ನು ನಿರ್ಮಿಸಿದ ವಿಷಯವನ್ನು ಇದು ಹೇಳುತ್ತದೆ. ಶಾಸನದಲ್ಲೇ ಅಲ್ಲದೆ ಕಾವ್ಯಗಳಲ್ಲಿಯೂ ನಾವು ಈ ಗುರು –ಶಿಷ್ಯರ ಸಂಬಂಧವನ್ನು ಗುರುತಿಸಬಹುದು. ಈ ಮರಿಸಿದ್ಧಲಿಂಗ ದೇಶಿಕರು ಹಲವಾರು ಕೃತಿಗಳನ್ನೂ ರಚಿಸಿದ್ದಾರೆ. ಇವರ ಕೃತಿಗಳಾದ 'ಮಾಲಾಟೀಕೆ' ಮತ್ತು 'ಏಕೋತ್ತರಶತಸ್ಥಲ ವ್ಯಾಖ್ಯಾನ'ಗಳಲ್ಲಿ ತಮ್ಮ ಗುರುಗಳಾದ ಹೊಸಕೋಟೆ ಮಹಂತೇಶ್ವರ ಪ್ರಭುಗಳನ್ನು ಉಲ್ಲೇಖಿಸಿದ್ದಾರೆ :

ವರ ಹೊಸಕೋಟೆಯ ಮಹಾಂತೇ
ಶ್ವರನನು ಭವದೊಳಗೆ ಪೇಳ್ದ ಶಬ್ದ ಸಮೂಹನ
ಪರಿವಿಡಿಗಳಿಂದ ಸೇರಿಸಿ
ಬರೆದೆ ಮರಿಸಿದ್ಧಲಿಂಗ ದೇಶಿಕದೇವಂ[1]

ಶಿವಾನುಭಾವಿಗಳಾದ ಹೊಸಕೋಟೆಯ
ಮಹಾಂತಸ್ವಾಮಿಯವರ ವಂಶೋದ್ಭವ
ರಾದ ಮರಿಸಿದ್ಧಲಿಂಗಯ್ಯನವರು
ಬರೆಸಿದ ಸ್ಥಲದ ವ್ಯಾಖ್ಯಾನದ ಯಥಾಪ್ರತಿಯು[2]

ಮೇಲೆ ಉಲ್ಲೇಖವಾಗಿರುವ 'ಮಹಂತೇಶ್ವರನನು ಭವದೊಳಗೆ ಪೇಳ್ದ ಶಬ್ದ ಸಮೂಹನ....', 'ಶಿವಾನುಭವಿಗಳಾದ' ಮುಂತಾದ ಮಾತುಗಳಿಂದ ಮತ್ತು ಶಾಸನದಲ್ಲಿ ಬಂದಿರುವ 'ಸಡುಸ್ತಲ ಚಕ್ರವರ್ತಿ' (ಷಟ್‌ಸ್ಥಲ ಚಕ್ರವರ್ತಿ) ಎಂಬ ಉಲ್ಲೇಖಗಳಿಂದ ಮಹಂತೇಶ ಪ್ರಭುಗಳು ಅನುಭಾವಿಗಳೂ, ದಾರ್ಶನಿಕರೂ ಮತ್ತು ಧಾರ್ಮಿಕ ಸಾಧನೆ ಸಿದ್ಧಿಯನ್ನು ಪಡೆದವರೂ ಆಗಿದ್ದರು ಎಂದು ಹೇಳಬಹುದು.

ಡಾ|| ವೀರಣ್ಣ ರಾಜೂರ ಅವರು 'ಮಹಂತಿನ ತಾರಾವಳಿ' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಇದರ ಕರ್ತೃ ಮರಿಸಿದ್ಧಲಿಂಗ ದೇಶಿಕ ಎಂಬುವನೇ. ಅವರು ತಮ್ಮ ಕೃತಿಯ ಪ್ರಸ್ತಾಪದಲ್ಲಿ "........ಇವನು ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯ ಪರಂಪರೆಗೆ ಸೇರಿದವನಾಗಿದ್ದು, ಸುಮಾರು ೧೭ನೇ ಶತಮಾನದಲ್ಲಿ ಆಗಿ

1 ಜಿ. ಎಮ್. ಉಮಾಪತಿಶಾಸ್ತ್ರಿ (ಸಂ.) : ಮರಿಸಿದ್ಧಲಿಂಗನ 'ಮಾಲಾಟೀಕೆ', ಅಂತ್ಯೋಲ್ಲೇಖ (೧೦೭-೧೩)
2 ಡಾ|| ಬಿ.ಆರ್. ಹಿರೇಮಠ : ಹಸ್ತಪ್ರತಿ–ಲಿಪಿಕಾರರು (ಏಕೋತ್ತರ ಶತಸ್ಥಲದ ಉಲ್ಲೇಖ) ಸಾಧನೆ, ೧೨–೨ (೧೯೮೩), ಪು.೪೮

ಹೋದವನಿರಬೇಕೆಂದು ಊಹಿಸಬಹುದಾಗಿದೆ" ಎಂದಿದ್ದಾರೆ.[3] ಈ ತಾರಾವಳಿಯ ಕೊನೆಯಲ್ಲಿರುವ ಒಂದು ಕಂದ ಪದ್ಯ ಹೀಗಿದೆ :

ಧರೆಯೊಳು ಗುರುಮಹಂತಿನ
ಬಿರುದಾವಳಿ ಮಹಿಮೆಯೆನಿಪ ತಾರಾವಳಿಯಂ
ಶರಣರು ಬರೆದೋದೆ ಮೋಕ್ಷವು
ದೊರೆವುದು ಮರಿಸಿದ್ಧಲಿಂಗದೇಶಿಕ ರಚಿತಂ। [4]

ಈ ಪದ್ಯದಿಂದ ಮಹಂತಿನ ತಾರಾವಳಿಯನ್ನು ಬರೆದವರು ಯಾರೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲೂ ಇದೇ ಹೆಸರಿರುವುದರಿಂದ ಇವರಿಬ್ಬರೂ ಒಬ್ಬನೇ ಆಗಿರಬೇಕು. ಶಾಸನದ ಕಾಲ ಕ್ರಿ. ಶ. ೧೭೬೧ ಎಂದು ಖಚಿತವಾಗಿರುವುದರಿಂದ, ಮೇಲಿನ ತಾರಾವಳಿಯ ಸಂಪಾದಕರು ಹೇಳಿರವಂತೆ ಮರಿಸಿದ್ಧಲಿಂಗ ದೇಶಿಕರ ಕಾಲ ಸುಮಾರು ೧೭ ನೇ ಶತಮಾನವಲ್ಲ; ಅದು ೧೮ನೇ ಶತಮಾನ (ಕ್ರಿ.ಶ. ೧೭೬೧) ಎಂದು ಹೇಳಬಹುದಾಗಿದೆ.[5] ಕವಿಚರಿತಕಾರರು ಉಲ್ಲೇಖ ಮಾಡಿರುವ ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ[6] (ಕಾಲ : ಕ್ರಿ. ಶ. ೧೭೦೦) ಯನ್ನು ಶ್ರೀ ಎಸ್. ಶಿವಣ್ಣನವರು ಇವನು ಮರಿಸಿದ್ಧಲಿಂಗ ದೇಶಿಕನಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಮತ್ತು 'ಅಷ್ಟಾವರಣ ಪ್ರಶಸ್ತಿ' ಹಾಗೂ 'ಭಾವಚಿಂತಾರತ್ನ ಟೀಕೆ' ಎಂಬ ಕೃತಿಗಳನ್ನು ಅವನ ಹೆಸರಿನಲ್ಲಿ ಉಲ್ಲೇಖಿಸಿದ್ದಾರೆ.[7]

ಈ ಶಾಸನದ ಮತ್ತೊಂದು ಮುಖ್ಯ ವೈಶಿಷ್ಟ್ಯವೆಂದರೆ, ಈ ಶಾಸನದಲ್ಲಿ 'ಶಿವಾನುಭಾವಿ', 'ಶಿವಯೋಗ', 'ಶೂನ್ಯಸಿಂಹಾಸನ', 'ಅನುಭವ ಮಂಟಪ', ಸಮಸ್ತಲ ಚಕ್ರವರ್ತಿ' (ಷಟ್‌ಸ್ಥಲ ಚಕ್ರವರ್ತಿ), 'ಮುಕ್ತಿ ಮಂಟಪ' ಮುಂತಾದ ವೀರಶೈವ ಪಾರಿಭಾಷಿಕ ಶಬ್ದಗಳ ಪ್ರಯೋಗಗಳಿವೆ. ಒಂದೇ ಶಾಸನದಲ್ಲಿ ಇಷ್ಟೊಂದು ವೀರಶೈವ ಪಾರಿಭಾಷಿಕ ಪದಗಳ ಪ್ರಯೋಗ ಅಪರೂಪವಾದುದಾಗಿದೆ. ಈ ದೃಷ್ಟಿಯಿಂದ ಈ ಶಾಸನ ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತದೆ.

ಶಾಸನದಲ್ಲಿ ಮಹಂತೇಶ್ವರ ಪ್ರಭುಗಳನ್ನು 'ಹೊಸಕೋಟೆಯ ಮಹಂತೇಶ್ವರಪ್ರಭು' ಎಂದು ಕರೆದಿರುವುದರಿಂದ, ಹೊಸಕೋಟೆಗೆ ಭೇಟಿಯಿತ್ತು ಪರಿಶೀಲಿಸಿದಾಗ, ಅಲ್ಲಿ ಮಹಂತೇಶ್ವರಮಠವಿರುವುದು ಕಂಡುಬಂದಿದೆಯಾದರೂ ಶಾಸನಕ್ಕೆ ಪೂರಕವಾದ ಯಾವ ದಾಖಲೆಗಳೂ ಕಂಡುಬರುವುದಿಲ್ಲ.[8] ಆದರೂ ಹೊಸಕೋಟೆಯ ಮಹಂತೇಶಮಠಕ್ಕೂ, ಬೆಂಗಳೂರಿನ ಬೇಲಿಮಠಕ್ಕೂ ಯಾವ ರೀತಿಯದಾದರೂ ಸಂಬಂಧ ಇದ್ದಿರಬಹುದು. ಈ ಎಲ್ಲ ವಿಷಯಗಳ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

**ಶಾಸನ ಪಾಠ**

೧ ಶ್ರೀಮತು ಶಿವಾನುಭಾವಿಗಳಾದ ಹೊಸಕೋಟೆಯ ಮಹಂತೇಶ್ವರ ಪ್ರಭು ಉವಿಸು ಸಂವತ್ಸರ

೨ ದ ಮಾರ್ಗಶಿರ ಮಾಸ ಶುದ್ಧ ಪಂಚಮಿಯ ಸೋಮವಾರದಲ್ಲಿ ಶಿವಯೋಗದೊಳು ನೆಲಸಿ

೩ ದ ಶೂನ್ಯಸಿಂಹ್ವಾಸನದ ಮೇಲಣ ಅನುಭವ ಮಂಟಪ ಪಾಲ್ಗುಣದಲ್ಲಿ ನಿರ್ಮಿತವಾಯ್ತು

೪ ಶ್ರೀಮತು ಸಮಸ್ತಲ ಚಕ್ರವರ್ತಿ ಯೆಂನೊಡೆಯ ಹೊಸಕೋಟೆಯ ಮಹಂತ ಗುರುಮೂರ್ತಿಯ ಪಾದಾ

೫ ಂಬುಜಭೃಂಗ ಮರಿಸಿದ್ಧಲಿಂಗ ದೇಸಿಕ ರಚಿತ

3 ಡಾ॥ ವೀರಣ್ಣ ರಾಜೂರ : ಮಹಂತಿನ ತಾರಾವಳಿ, ಪರಂಜ್ಯೋತಿ, ೧೬–೪ (೧೯೮೩), ಪು. ೨೦೪
4 ಅದೇ, ಅಂತ್ಯದ ಕಂದ ಪದ್ಯ, ಪು. ೨೦೯
5 ಇವರು ತಮ್ಮ 'ಮಹಂತಿನ ತಾರಾವಳಿ'ಯ ಅನೇಕ ಕಡೆ 'ಗುರುಮಹಂತ', 'ಮಹಂತಿನ' ಎಂಬ ಮಾತುಗಳನ್ನು ಬಳಸಿರುವುದರಿಂದ, ಅವರು 'ಮಹಂತೇಶ್ವರ ಪ್ರಭುಗಳು' ಆಗಿರಬಹುದು ಎಂದು ಊಹಿಸಬಹುದು
6 ಆರ್. ನರಸಿಂಹಚಾರ್ : ಕರ್ಣಾಟಕ ಕವಿಚರಿತೆ, ಸಂ. ii, ಪು. ೪೯೮
7 ಎಸ್. ಶಿವಣ್ಣ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ-೪, ಅನುಬಂಧ, ಪು. ೪೭೬
8 ಇಂದು ಆ ಮಠ ಮನೆಯಾಗಿ ಪರಿವರ್ತನೆಯಾಗಿ ಅಸ್ತಿತ್ವ ಕಳೆದುಕೊಂಡಿದೆ

ಮುಕ್ತಿಮಂಟಪ ಕುಸುಮ ತವ ಚರಣ
ಸಮರ್ಪಣಂ.

**ಸಾರಾಂಶ :** ಶಿವಯೋಗಿಗಳಾದ ಹೊಸಕೋಟೆಯ ಮಹಾಂತೇಶ್ವರ ಪ್ರಭುಗಳು ಶಿವೈಕ್ಯರಾದಾಗ ಈ ಶೂನ್ಯಸಿಂಹಾಸನದ ಮೇಲಣ ಅನುಭವಮಂಟಪ ಫಾಲ್ಗುಣದಲ್ಲಿ ನಿರ್ಮಿತವಾಯಿತು. ಇದನ್ನು ಷಟ್‌ಸ್ಥಲ ಚಕ್ರವರ್ತಿಯಾದ ಮಹಂತೇಶ್ವರ ಪ್ರಭುಗಳ ಆಪ್ತ ಶಿಷ್ಯನಾದ ಮರಿಸಿದ್ಧಲಿಂಗದೇಶಿಕನು ರಚಿಸಿ ಅವರ ಪಾದಗಳಿಗೆ ಅರ್ಪಿಸಿದನು.*

* ಈ ಶಾಸನ ಪ್ರಕಟನೆಗೆ ಅನುಮತಿಯಿತ್ತು ಸಹಕರಿಸಿದ ಬೇಲಿಮಠದ ಪೂಜ್ಯರಾದ ಶ್ರೀ ಶ್ರೀ ಶಿವರುದ್ರಸ್ವಾಮಿಗಳಿಗೂ, ಶಾಸನವನ್ನು ಮತ್ತು ಮರಿಸಿದ್ಧಲಿಂಗದೇಶಿಕನ ಕೃತಿಗಳನ್ನು ನನ್ನ ಗಮನಕ್ಕೆ ತಂದು ಎಲ್ಲ ನೆರವು ನೀಡಿದ ಶ್ರೀಎಸ್. ಶಿವಣ್ಣನವರಿಗೂ, ಶಾಸನಪಾಠವನ್ನು ಪರಿಷ್ಕರಿಸಿಕೊಟ್ಟ ಗುರುಗಳಾದ ಶ್ರೀ ದೇವರ ಕೊಂಡಾರೆಡ್ಡಿಯವರಿಗೂ ಹಾಗೂ ಲೇಖನದ ಅಂತಿಮ ರೂಪಕ್ಕೆ ನೆರವು ನೀಡಿದ ಶ್ರೀ ನಾ. ಗೀತಾಚಾರ್ಯ ಅವರಿಗೂ ನಾನು ಆಭಾರಿಯಾಗಿದ್ದೇನೆ.